ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 13 ನೇ ಮಾರ್ಚ್, 2020

ಬೀದರ್ ಜಿಲ್ಲೆಯಲ್ಲಿ ಪ್ರವಾಸೋದ್ಯಮ ಅಭಿವೃದ್ಧಿ ಕುರಿತು

ಶ್ರೀರಘುನಾಥ್ ರಾವ್ ಮಲ್ಕಾಪೂರೆ(ವಿಧಾನಸಭೆಯಿಂದ ಚುನಾಯಿತರಾದವರು):-

884 (963) ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೀದರ್ ಜಿಲ್ಲೆಯಲ್ಲಿರುವ ಪ್ರವಾಸ ಸ್ಥಳಗಳು ಯಾವುವು ; ಕಳೆದ 3 ವರ್ಷಗಳಲ್ಲಿ ಈ ಪ್ರವಾಸ ತಾಣಗಳಲ್ಲಿ ಕೈಗೊಂಡಿರುವ ಅಭಿವೃದ್ಧಿ ಕಾರ್ಯ ಕ್ರಮಗಳು, ಕಾಮಗಾರಿಗಳು, ಯಾವುವು ; ಇದಕ್ಕಾಗಿ ಒದಗಿಸಿರುವ ಹಾಗೂ ಖರ್ಚು ಮಾಡಿರುವ ಅಂದಾಜು ಆಯವ್ಯಯ ಎಷ್ಟು ; (ಕಾಮಗಾರಿಯ ಸಂಪೂರ್ಣ ಮಾಹಿತಿ ನೀಡುವುದು)

(ಆ) ಬೀದರ್ ಜಿಲ್ಲೆ ಪ್ರವಾಸೋದ್ಯಮ ಮಿಷನ್ 2020 ಯೋಜನೆಯನ್ನು ರೂಪಿಸಲಾಗಿದೆಯೇ ; ಈ ಯೋಜನೆ ಪ್ರಕಾರ ಹೊಸದಾಗಿ ಗುರುತಿಸಿರುವ ಮತ್ತು ಅಭಿವೃದ್ಧಿ ಪಡಿಸಲಿರುವ ಪ್ರವಾಸಿ ಸ್ಥಳಗಳು ಯಾವುವು ; ಈ ಯೋಜನೆಯ ಪ್ರಕಾರ ಬೀದರ್ ಜಿಲ್ಲೆಗೆ ಮಂಜೂರಾಗಿರುವ ಅಂದಾಜು ಮೊತ್ತ ಎಷ್ಟು ;

(ಇ) ಈ ಬಗ್ಗೆ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಕಳುಹಿಸಲಾಗಿದೆಯೇ ; ಈ ಯೋಜನೆ ಕೇಂದ್ರ ಸರ್ಕಾರದಿಂದ ಮಂಜೂರಾಗಿ ಬಂದಿದೆಯೇ ? (ವಿವರ ನೀಡುವುದು)